ನಮ್ಮ ಸಮಸ್ಯೆಗಳಿಗೆ

# ಭಗವದ್ಗೀತೆಯ

## ಪರಿಷ್ಕಾರ


ಮೂಲ :

ಡಾ|| ಎಸ್. ಬಿ. ರಘುನಾಥಾಚಾರ್ಯ ಎಂ.ಎ., ಪಿ.ಎಚ್.ಡಿ.

ಅನುವಾದ :

ಶ್ರೀಮತಿ ಎಸ್. ವಿ. ಹೇಮಾವತಿ ಎಂ.ಎ., ಬಿ.ಎಡ್.






ಪ್ರಕಟನ ಶಾಖೆ

ತಿರುಮಲೆ — ತಿರುಪತಿ ದೇವಸ್ಥಾನಗಳು, ತಿರುಪತಿ.

1997

ನಮ್ಮ ಸಮಸ್ಯೆಗಳಿಗೆ

# ಭಗವದ್ಗೀತೆಯ

ಪರಿಷ್ಕಾರ


ಮೂಲ :

ಡಾ।। ಎಸ್. ಬಿ. ರಘುನಾಥಾಚಾರ್ಯ ಎಂ.ಎ., ಪಿ.ಎಚ್.ಡಿ.

ಅನುವಾದ :

ಶ್ರೀಮತಿ ಎಸ್. ವಿ. ಹೇಮಾವತಿ ಎಂ.ಎ., ಬಿ.ಎಡ್.






ಪ್ರಕಟನ ಶಾಖೆ

ತಿರುಮಲೆ —ತಿರುಪತಿ ದೇವಸ್ಥಾನಗಳು, ತಿರುಪತಿ.

1997

**NAMMA SAMASYE GALIGE**
**BHAGAVADGITHEYA PARISHKARA**

By

**Dr. S. B. RAGHUNATHACHARYA,** M.A., Ph.D.,



TRANSLATED BY

**Smt. S. V. HEMAVATHY,** M.A., B.Ed.,

T.T.D. Religious Publications Series No. 132



First Edition : 1982

Re-Print : 1997

Copies : 2,000

Price : Rs. 7–00



*Published By:*

M.K.R. Vinayak, I.A.S.,
Executive Officer,
Tirumala Tirupati Devasthanams,
Tirupati – 517 507.

Printed at :
**Raja Printers**
Bangalore - 560 027
Ph.: 080-2234066

# ಪ್ರಕಾಶಕರ ಮಾತು

ಪ್ರಸ್ಥಾನತ್ರಯದಲ್ಲಿ ಒಂದಾದ ಭಗವದ್ಗೀತೆ ಭಾರತೀಯ ತತ್ವಶಾಸ್ತ್ರದ ಸಾರವಾಗಿದೆಯೆಂದು ಹೇಳಲಾಗಿದೆ. ಎಂತಲೇ ವಿವಿಧ ಆಚಾರ್ಯರೂ, ತತ್ವಚಿಂತಕರೂ ಅದಕ್ಕೆ ಅಂದಿನಿಂದಲೂ ಅಸಂಖ್ಯರೀತಿಯಲ್ಲಿ ಬಹುಭಾಷೆಗಳಲ್ಲಿ ವ್ಯಾಖ್ಯಾನಗಳನ್ನೂ ವಿವರಣೆಗಳನ್ನೂ ಬರೆದಿದ್ದಾರೆ. ಒಟ್ಟು ಎಲ್ಲ ರೀತಿಯ ವ್ಯಾಖ್ಯಾನಕಾರರೂ ಇದರಿಂದಾಗಿ ಪ್ರಯೋಜನ ಅತಿ ಹೆಚ್ಚು ಎಂಬುದನ್ನು ಏಕವಾಕ್ಯರಾಗಿ ಒಪ್ಪುತ್ತಾರೆ. ಯೋಗೇಶ್ವರನಾದ ಶ್ರೀಕೃಷ್ಣ ಮರ್ತ್ಯಪಾರ್ಥನಿಗೆ ಜೀವನದ ಕುರುಕ್ಷೇತ್ರದಲ್ಲಿ ಎದುರಾಗುವ ಸಮಸ್ಯೆಗಳ ಪರಿಹಾರವನ್ನು ಈ ಮೂಲಕ ನೀಡಿದ್ದಾನೆ ಎಂದರೂ ಸರಿ. ಇಂತಹ ಭಗವದ್ಗೀತೆಯನ್ನು ಸಮಕಾಲೀನ ಸಮಸ್ಯಾಬದ್ಧ ಸಮಾಜದಲ್ಲಿ ಹೇಗೆ ಪರಿಹಾರೋಪಾಯವಾಗಿ ಬಳಸಬಹುದೆಂಬುದನ್ನು ಡಾ।। ಎಸ್. ಬಿ. ರಘುನಾಥಾಚಾರ್ಯರು ವಿವರಿಸಿದ್ದಾರೆ. ಪ್ರಶ್ನೋತ್ತರ ರೂಪವಾಗಿರುವ ಈ ಕೃತಿ ತೆಲುಗು ಮೂಲಕ ಕನ್ನಡಾನುವಾದವನ್ನು ಸಿದ್ಧಪಡಿಸಿದವರು ಶ್ರೀಮತಿ ಎಸ್. ವಿ. ಹೇಮಾವತಿ ಅವರು.

1982 ರಲ್ಲಿ ಪ್ರಥಮಬಾರಿಗೆ ಮುದ್ರಿತವಾದ ಈ ಪುಸ್ತಕವನ್ನು ಕನ್ನಡಿಗರು ಪ್ರೀತಿಯಿಂದ ಸ್ವೀಕರಿಸಿದ್ದರು. ಪ್ರತಿಗಳೆಲ್ಲ ಮುಗಿದು ಹೋಗಿ ಬೇಡಿಕೆ ಇರುವುದರಿಂದ ಪುನಃ ಮುದ್ರಿಸಲಾಗಿದೆ. ವಾಚಕರ ಆದರಕ್ಕೆ ಪಾತ್ರವಾಗುವುದೆಂದು ನಂಬಲಾಗಿದೆ.

ತಿರುಪತಿ
14–8–97

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ. ತಿ. ದೇವಸ್ಥಾನಗಳು, ತಿರುಪತಿ.

# ಮುನ್ನುಡಿ

ಮುಂದಿನ ಪುಟಗಳಲ್ಲಿ ಪ್ರಶ್ನೋತ್ತರ ರೂಪದಲ್ಲಿ ಸಂಗ್ರಹವಾಗಿ ಭಗವದ್ಗೀತೆಯನ್ನು ಸಾದರ ಪಡಿಸಲಾಗಿದೆ. 'ಭಗವದ್ಗೀತೆಯು ತಾತ್ವಿಕ ವಿಷಯಗಳ ಗೊಂಡಾರಣ್ಯ' ಎಂದು ಭ್ರಮೆ ಹೊಂದಿದವರು, ಭಗವದ್ಗೀತೆ ಅನುಷ್ಠಾನ ಯೋಗ್ಯ ಸರಳ ಅಂಶಗಳನ್ನೂ ಹೊಂದಿದೆ ಎಂಬುದನ್ನು ಇಲ್ಲಿ ಖಚಿತಪಡಿಸಿಕೊಳ್ಳಬಹುದು. ಈ ಪ್ರಶ್ನೋತ್ತರಗಳನ್ನು ಸಾಮಾನ್ಯರಿಗೂ ಅರ್ಥವಾಗುವಂತೆ ರೂಪಿಸಿದವರು ಡಾ।। ಎಸ್. ಬಿ. ರಘುನಾಥಾಚಾರ್ಯ ಅವರು ಅವರ ತೆಲುಗು ಕೃತಿಯ ಅನುವಾದ ಈ ಕಿರುಹೊತ್ತಿಗೆ.

ಈ ಅನುವಾದ ಕೃತಿಯನ್ನು ತಿ. ತಿ. ದೇ. ಪ್ರಕಟನೆಯಾಗಿ ಸ್ವೀಕರಿಸಿದ ತಜ್ಞ ಸಮಿತಿಗೂ, ಸಪ್ತಗಿರಿಯ ಸಂಪಾದಕ ಶ್ರೀ ಕೆ. ಸುಬ್ಬರಾವ್ ಅವರಿಗೂ ಅತ್ಯಲ್ಪ ಕಾಲದಲ್ಲಿ ಮುದ್ರಿಸಿದ ರಾಜಾ ಪ್ರಿಂಟರ್ಸ್ ಮತ್ತವರ ಸಿಬ್ಬಂದಿಗೂ ನನ್ನ ವಂದನೆಗಳು.

ಕನ್ನಡದ ಪಾಠಕರಿಗೂ ಇಂತಹ ಕೃತಿಯ ಪರಿಚಯ ಆಗಲಿ ಎಂಬುದೇ ಅನುವಾದದ ಉದ್ದೇಶವಾಗಿರುವುದರಿಂದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸುವ ಕನ್ನಡಿಗರು ಇವನ್ನು ಆದರದಿಂದ ಬರಮಾಡಿಕೊಂಡು ಅಭಿಮಾನದಿಂದ ಓದುವರೆಂದು ಭಾವಿಸಲಾಗಿದೆ.

**ಎಸ್. ವಿ. ಹೇಮಾವತಿ ಎಂ.ಎ.**

30-6-82
ಕೋಲಾರ

# ಆ ಮು ಖ

ಪ್ರಸ್ಥಾನತ್ರಯ – ವಿಶ್ವದ ವಿರಾಟ್ ಪುರುಷನನ್ನು ಸಾಕ್ಷಾತ್ಕಾರ ಮಾಡಿಕೊಂಡು ಸಕಲ ವೇದಾಂತಸಾರವನ್ನು ಸರ್ವಮಾನವಕಲ್ಯಾಣಕ್ಕಾಗಿ ತಿಳಿಯ ಹೇಳಿದ ದೇಶ ನಮ್ಮ ಭಾರತ. ಈ ದೇಶದಲ್ಲಿ ಹುಟ್ಟಿ ಬೆಳೆದ ಪ್ರಾಚೀನ ಭಾರತೀಯನು ಭೋಗಲಾಲಸನಾಗಿ ಆಹಾರನಿದ್ರಾಭಯಮೈಥುನತತ್ಪರನಾಗಿ ಪಶುಗಳೊಂದಿಗೆ ಸಾಮ್ಯವನ್ನು ಹೊಂದದೆ ಬುದ್ಧಿಬಲದಿಂದ ಅವಕ್ಕಿಂತಲೂ ಹೆಚ್ಚಿನ ವೈಶಿಷ್ಟ್ಯವನ್ನು ತನ್ನಲ್ಲಿ ಗುರುತಿಸಿಕೊಂಡನು. 'ನಾನು ಯಾರು ? ಈ ಪ್ರಪಂಚ ಏನು ? ನನಗೂ ಈ ಪ್ರಪಂಚಕ್ಕೂ ಏನು ಸಂಬಂಧ ? ಈ ಪ್ರಪಂಚವನ್ನೂ ನನ್ನನ್ನೂ ಸೃಷ್ಟಿಸಿದವರು ಯಾರಾದರೂ ಇದ್ದಾರೆಯೇ ?' – ಎಂದು ಈ ರೀತಿಯಿಂದ ಆಲೋಚಿಸತೊಡಗಿದನು. ಆತನ ಆಲೋಚನೆಗಳ ಫಲಿತಾಂಶವೇ, ಆತನ ವಿಚಾರಗಳ ಸಾರವೇ ಈ ದಿನ ನಾವು ನೋಡುತ್ತಿರುವ ವೇದಾಂತದ ಮೂಲತತ್ತ್ವಗಳು.

ಪ್ರಸ್ಥಾನ ಎಂದರೆ ಪ್ರಕಟವಾಗುವುದು. ಒಂದೊಂದು ಕಾಲದಲ್ಲಿ ಆಯಾ ಅಧಿಕಾರವನ್ನು ಅನುಸರಿಸಿ ಉಂಟಾದ ತಾತ್ತ್ವಿಕ ಮಾರ್ಗಗಳೇ ನಂತರದಲ್ಲಿ ಪ್ರಸ್ಥಾನಗಳೆಂದು ವ್ಯವಹಾರಕ್ಕೆ ಬಂದವು. ಇವುಗಳಲ್ಲಿ ವೇದಗಳ ಕೊನೆಯಲ್ಲಿ ಇರುವುದರಿಂದ, ಜ್ಞಾನರೂಪಿಯಾದ ವೇದರಾಶಿಯ ಸಿದ್ಧಾಂತವಾಗಿರುವುದರಿಂದ, ವೇದಾಂತಗಳೆಂದು ಹೆಸರಿಸಲಾಗಿರುವ ಉಪನಿಷತ್ತುಗಳೇ ಮೊದಲ ಪ್ರಸ್ಥಾನ. ಆ ಕಾಲದ ಮಹರ್ಷಿಗಳು, ಅವರ ವಿಚಾರಧಾರೆ, ಅವರ ಸಂಸ್ಕೃತಿ, ತತ್ತ್ವಾನ್ವೇಷಣ ಪದ್ಧತಿಗಳು ನಮಗೆ ಅವುಗಳಲ್ಲಿ ಕಾಣಬರುತ್ತದೆ. ಕಾಲವು ಉರುಳಿತು. ಮನುಷ್ಯನ ಅರ್ಹತೆಗಳು, ಶಕ್ತಿಯುಕ್ತಿಗಳು ಬದಲಾವಣೆ ಹೊಂದಿದವು. ಉಪನಿಷತ್ತುಗಳಿಂದ ಇವನಿಗೆ ಬುದ್ಧಿವ್ಯಾಮೋಹ ಉಂಟಾಯಿತೇ ಹೊರತು ಕರ್ತವ್ಯವನ್ನು ಬೋಧಿಸಲಾಗಲಿಲ್ಲ. ವೇದವ್ಯಾಸನು ಅವತರಿಸಿದನು. ವೇದಗಳನ್ನು ಋುಗ್, ಯಜುರ್, ಸಾಮ ಅಥರ್ವಣಗಳಾಗಿ ವರ್ಗೀಕರಿಸಿದನು. ವೇದೋಪಬ್ರಂಹಣಕ್ಕಾಗಿ ಎಷ್ಟೋ ಪುರಾಣಗಳನ್ನು ಬರೆದನು. ಅದರಲ್ಲಿ ಪಂಚಮವೇದವೆಂದು ಪ್ರಸಿದ್ಧಿಹೊಂದಿರುವುದು ಮಹಾಭಾರತ. ಮಹಾಭಾರತದಲ್ಲಿ ಆರನೆಯದಾದ ಭೀಷ್ಮಪರ್ವದಲ್ಲಿ ವಿಷಣ್ಣಹೃದಯದವನಾದ ಅರ್ಜುನನಿಗೆ ಕರ್ತವ್ಯವನ್ನು ಬೋಧಿಸುವುದಕ್ಕಾಗಿ ಶ್ರೀಕೃಷ್ಣಪರಮಾತ್ಮನು ಉಪದೇಶಿಸಿದುದೇ ಭಗವದ್ಗೀತೆ. ಇದು ಎರಡನೆಯ ಪ್ರಸ್ಥಾನ. ಇದಕ್ಕೆ ಉಪನಿಷತ್ತುಗಳೇ ಮೂಲವಾದರೂ ಇದರಲ್ಲಿನ ಪ್ರತಿಪಾದನ ಪದ್ಧತಿ ತಾರ್ಕಿಕವಾಗಿ ವಿಷಯ ನಿಷ್ಕರ್ಷೆಗೆ ಉಪಯೋಗವಾಗುತ್ತದೆ. ವೇದವ್ಯಾಸನು ವೇದೋಪಬ್ರಂಹಣಕ್ಕಾಗಿ ಮಹಾಭಾರತವನ್ನು ರಚಿಸಿದನು. ವೇದಗಳನ್ನು ವರ್ಗೀಕರಿಸಿ ಮಹಾಭಾರತದಲ್ಲಿ ವೇದಾಂತಸಾರವಾದ ಭಗವದ್ಗೀತೆಯನ್ನು ಹೊಂದಿಸಿದರೂ ಆತನಿಗೆ ತೃಪ್ತಿಯುಂಟಾಗಲಿಲ್ಲ. ಬಹಳ ಜನಗಳಿಗೆ ಸಂಶಯಾತ್ಮಕ ಘಟ್ಟಗಳು ಈ ಎರಡು ಪ್ರಸ್ಥಾನಗಳಲ್ಲಿ ಎಷ್ಟೋ ಎದುರಾಗುತ್ತವೆ. ಅದಕ್ಕಾಗಿಯೇ ತಾತ್ಪರ್ಯವನ್ನು ನೇರವಾಗಿ ಹೇಳುವುದಕ್ಕಾಗಿ ನಾಲ್ಕು ಅಧ್ಯಾಯಗಳಲ್ಲಿ

ಉಪನಿಷತ್‌ಸಾರವನ್ನೂ ಭಗವದ್ಗೀತಾಸಾರವನ್ನೂ ಬ್ರಹ್ಮಸೂತ್ರಗಳೆಂಬ ಹೆಸರಿನಲ್ಲಿ ಆತನು ರಚಿಸಿದನು. ಇದು ಮೂರನೆಯ ಪ್ರಸ್ಥಾನ. ಹೀಗೆ ನಮಗೆ ಪ್ರಸ್ಥಾನತ್ರಯ ಉಂಟಾಯಿತು. ಈ ಪ್ರಸ್ಥಾನತ್ರಯದಲ್ಲಿ ಮಧ್ಯದ ಸ್ಥಾನವನ್ನು ಭಗವದ್ಗೀತೆಯು ಆಕ್ರಮಿಸಿಕೊಂಡಿದೆ.

1. **ಭಗವದ್ಗೀತೆ** : ಶ್ರೀಕೃಷ್ಣಪರಮಾತ್ಮನು ಭಗವಂತನು. ಕುರುಪಾಂಡವ ಯುದ್ಧದಲ್ಲಿ ಅರ್ಜುನನು ಅಜ್ಞಾನದಿಂದ ಮಮಕಾರದಿಂದ ನನ್ನವರೆಲ್ಲರನ್ನೂ ನಾನು ಹೇಗೆ ಸಂಹರಿಸಲಿ ಎಂದು ಪಲಾಯನಚಿತ್ತನಾಗಿರಲು ಅವನ ಮೇಲೆ ದಯೆ ಹೊಂದಿ ಅವನನ್ನೇ ನೆಪವಾಗಿಟ್ಟುಕೊಂಡು ''ತಾನೇ ಭಗವಂತ'' ಎಂದು ಉಪದೇಶಿಸಿದ ತತ್ತ್ವಾಮೃತವೇ ಭಗವದ್ಗೀತೆ.

2. **ಶ್ರೀ ಕೃಷ್ಣಾವತಾರ ಪ್ರಯೋಜನ** : ಶ್ರೀ ಮಹಾವಿಷ್ಣುವು ಧರಿಸಿದ ಹತ್ತು ಅವತಾರಗಳಿಗೂ ಸಾಮಾನ್ಯ ಪ್ರಯೋಜನಗಳೆಂದರೆ ದುಷ್ಟಶಿಕ್ಷಣ, ಶಿಷ್ಟ ರಕ್ಷಣ. ಆದರೂ ಒಂದೊಂದು ಅವತಾರದಲ್ಲೂ ಒಂದೊಂದು ವಿಶಿಷ್ಟ ಪ್ರಯೋಜನವಿದೆ. ಹಾಗೆ ಆಲೋಚಿಸಿದಾಗ ಶ್ರೀ ರಾಮಾವತಾರದಲ್ಲಿ ಆತ ಧರ್ಮಮೂರ್ತಿಯಾಗಿ ಆದರ್ಶ ಪ್ರಭುವಾಗಿ ಲೋಕಕ್ಕೆ ಧರ್ಮವನ್ನು ಉಪದೇಶಿಸಿದನು. ಸಾಮಾನ್ಯ ಮನುಷ್ಯನಾಗಿ ಎಲ್ಲರೊಂದಿಗೂ ಇದ್ದು, ಅನೇಕ ಬಾಧೆಗಳನ್ನು ಅನುಭವಿಸಿಯೂ ಸಹ ಧರ್ಮವನ್ನು ಅಣುಮಾತ್ರವೂ ಕೂಡ ದಾಟದೆ ರಕ್ಷಿಸಿದನು. ಅದು ಆ ಅವತಾರಕ್ಕೆ ವಿಶಿಷ್ಟ ಪ್ರಯೋಜನವೆಂದು ಹೇಳಬಹುದು. ಅದು ತ್ರೇತಾಯುಗ, ನಂತರ ದ್ವಾಪರ ಯುಗವು ಬಂದಿತು. ಧರ್ಮಸ್ವರೂಪ ಹಾಗೂ ಮನುಷ್ಯರ ಮನಸ್ಸತ್ವಗಳು ಬದಲಾಗಿ ಹೋಯಿತು. ಯುಗಧರ್ಮಪ್ರಭಾವಗಳಿಗೆ ಮನುಷ್ಯನು ಬಂಧಿಯಾದನು. ಕೇವಲ ಆದರ್ಶ ಪ್ರವರ್ತನೆಗಳಿಂದ ಲೋಕವನ್ನು ಜಾಗ್ರತಗೊಳಿಸುವುದು ಸಾಧ್ಯವಾಗದ ಕೆಲಸ. ಅದಕ್ಕಾಗಿಯೇ ಭಗವಂತನು ವಾಕ್‌ರೂಪವಾಗಿ ಜೀವತತ್ತ್ವವನ್ನು, ಪ್ರಪಂಚ ತತ್ತ್ವವನ್ನು, ಈಶ್ವರತತ್ತ್ವವನ್ನು ಉಪದೇಶಿಸಹೊರಟನು. ಅವತರಿಸಿದ ಕ್ಷಣದಿಂದ ಆ ಸಮಯಕ್ಕಾಗಿ ಎದುರು ನೋಡತೊಡಗಿದನು. ಕುರುಕ್ಷೇತ್ರ ಯುದ್ಧ ಬಂದಿತು. ಅದಕ್ಕಾಗಿಯೇ ಪಾರ್ಥನಿಗೆ ಸಾರಥಿಯಾದನು, ಈ ಮಾಯಾ ನಾಟಕಸೂತ್ರಧಾರಿ. ಅರ್ಜುನನ ಪ್ರಗಲ್ಭವನ್ನು ಕೇಳಿದನು. ಅವನ ರಥವನ್ನು ಇಳಿದು ಓಡಿಹೋಗುವವರೆಗೂ ನೋಡಿದನು. ಅವನನ್ನು ಒಂದು ನೆಪವನ್ನಾಗಿ ಮಾಡಿಕೊಂಡು ಆಗ ತತ್ತ್ವಶಾಸ್ತ್ರ ರಹಸ್ಯವನ್ನು ಲೋಕಕ್ಕೆ ಬೋಧಿಸಿದನು. ಹಾಗೆ ಅವನು ಉಪದೇಶಿಸಿದುದೇ ಭಗವದ್ಗೀತೆ. ಭಗವದ್ಗೀತೆಯು ಇಂದಿಗೂ ಪರಮ ಪ್ರಮಾಣವಾಗಿ ನಿಂತಿದೆ.

3. **ಅಧ್ಯಾಯಗಳ ಪಾರಾಯಣದ ಫಲ** : ಭಗವದ್ಗೀತೆಯ ಪಾರಾಯಣದಿಂದ ಹಲವು ರೀತಿಯ ಫಲಗಳು ಪ್ರಾಪ್ತವಾಗುವುದೆಂದು ನಮ್ಮವರು ಹೇಳುತ್ತಾರೆ. ಇವು ಅದರಲ್ಲಿರುವ ವಿಷಯಗಳನ್ನು ಅರ್ಥಮಾಡಿಕೊಳ್ಳದ ಹೊರತು

ಲಭ್ಯವಾಗುವುದಿಲ್ಲ. ನಿಯಮದಿಂದ ಪಾರಾಯಣ ಮಾಡಿದರೆ ಅದರಿಂದ ಪಾಪಗಳು ಕಳೆದು ಪುಣ್ಯ ದೊರೆಯುತ್ತದೆ. ಅವುಗಳ ವಿವರಗಳು ಈ ರೀತಿ ಇವೆ.

1. ಅರ್ಜುನ ವಿಷಾದಯೋಗ : ಇದನ್ನು ಓದುವುದರಿಂದ ಮಾನವನಿಗೆ ಪೂರ್ವಜನ್ಮದ ಸ್ಮೃತಿ ಉಂಟಾಗುತ್ತದೆ.

2. ಸಾಂಖ್ಯಯೋಗ : ಇದರಿಂದ ಆತ್ಮಸ್ವರೂಪವು ಗೋಚರಿಸುತ್ತದೆ.

3. ಕರ್ಮಯೋಗ : ಇದನ್ನು ಪಾರಾಯಣ ಮಾಡುವಲ್ಲಿ, ಆತ್ಮಹತ್ಯೆ ಇತ್ಯಾದಿಗಳಿಂದ ಸತ್ತುಹೋಗಿ ಪ್ರೇತತ್ವವು ಹೋಗದಿರುವಂತಹ ಜೀವಿಗಳಿದ್ದರೆ ಅವರಿಗೆ ಪ್ರೇತತ್ವವು ನಾಶವಾಗುತ್ತದೆ.

4-5. ಜ್ಞಾನಯೋಗ : ಕರ್ಮಸನ್ಯಾಸಯೋಗ : ಈ ಅಧ್ಯಾಯವನ್ನು ಕೇಳುವುದರಿಂದ ಗಿಡಗಳು, ಪಶುಗಳು, ಪಕ್ಷಿಗಳೂ ಸಹ ಪಾಪವನ್ನು ಕಳೆದುಕೊಂಡು ಉತ್ತಮಗತಿಯನ್ನು ಪಡೆಯುತ್ತವೆ.

6. ಆತ್ಮಸಂಯಮಯೋಗ : ಇದನ್ನು ಪಾರಾಯಣ ಮಾಡುವುದರಿಂದ ಸಮಸ್ತ ದಾನಫಲವೂ ದೊರೆತು ವಿಷ್ಣು ಸಾಯುಜ್ಯವನ್ನು ಪಡೆಯುವರು.

7. ವಿಜ್ಞಾನಯೋಗ : ಈ ಅಧ್ಯಾಯವನ್ನು ಕೇಳಿದರೆ ಜನ್ಮರಾಹಿತ್ಯ ಉಂಟಾಗುವುದು.

8. ಅಕ್ಷರ ಪರಬ್ರಹ್ಮಯೋಗ : ಈ ಅಧ್ಯಾಯವನ್ನು ಕೇಳಿದರೆ ಸ್ಥಾವರತ್ವ, ಬ್ರಹ್ಮ ರಾಕ್ಷಸತ್ವವು ತೊಲಗಿ ಹೋಗುತ್ತದೆ.

9. ರಾಜವಿದ್ಯಾರಾಜಗುಹ್ಯಯೋಗ : ಇದನ್ನು ಓದಿದರೆ ಇತರರ ಹತ್ತಿರ ಏನಾದರೂ ವಸ್ತುವನ್ನು ತೆಗೆದುಕೊಂಡಿದ್ದರಿಂದಾಗಿ ನಮಗೆ ಉಂಟಾದ ಪಾಪವು ಪರಿಹಾರವಾಗುತ್ತದೆ.

10. ವಿಭೂತಿಯೋಗ : ಆಶ್ರಮಧರ್ಮಗಳನ್ನು ಸಕ್ರಮವಾಗಿ ನಿರ್ವಹಿಸಿದರೆ ಯಾವ ಪುಣ್ಯವು ಪ್ರಾಪ್ತವಾಗುತ್ತದೆಯೋ ಅದು ಲಭಿಸುತ್ತದೆ. ಜ್ಞಾನವು ಕೂಡ ಹೆಚ್ಚುವುದು.

11. ವಿಶ್ವರೂಪ ಸಂದರ್ಶನಯೋಗ : ಇದನ್ನು ಪಾರಾಯಣ ಮಾಡುವುದರಿಂದ ಸತ್ತುಹೋದವರೂ ಸಹ ಪುನಶ್ಚೈತನ್ಯವನ್ನು ಪಡೆಯುತ್ತಾರೆ.

12. ಭಕ್ತಿಯೋಗ : ಇದರಿಂದ ಇಷ್ಟದೇವತೆಯ ಸಾಕ್ಷಾತ್ಕಾರವಾಗುತ್ತದೆ. ಸತ್ತವರಲ್ಲೂ ಚೈತನ್ಯ ಉಂಟಾಗುವುದು.

13. ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗ : ಇದನ್ನು ಪಾರಾಯಣ ಮಾಡಿದರೆ ಚಂಡಾಲತ್ವವು ನಶಿಸುತ್ತದೆ.

14. ಗುಣತ್ರಯ ವಿಭಾಗಯೋಗ : ಇದರಿಂದ ಸ್ತ್ರೀಹತ್ಯಾಪಾತಕ, ವ್ಯಭಿಚಾರ ದೋಷಗಳು ಇಲ್ಲವಾಗುತ್ತವೆ.

15. ಪುರುಷೋತ್ತಮ ಪ್ರಾಪ್ತಿಯೋಗ : ಭೋಜನ ಮಾಡುವ ಮೊದಲು ಇದನ್ನು ಓದಬೇಕು. ಇದರಿಂದ ಆಹಾರಶುದ್ಧಿಯುಂಟಾಗಿ ಮೋಕ್ಷ ಸಿದ್ಧಿಸುತ್ತದೆ.
16. ದೈವಾಸುರ ಸಂಪದ್ವಿಭಾಗಯೋಗ : ಇದರಿಂದ ಬಲಪರಾಕ್ರಮಗಳು ಸುಖ ಲಭಿಸುತ್ತವೆ.
17. ಶ್ರದ್ಧಾತ್ರಯ ವಿಭಾಗಯೋಗ : ಇದರಿಂದ ಎಷ್ಟೋ ವಿಧವಾದ ತೀವ್ರತರ ವ್ಯಾಧಿಗಳು ವಾಸಿಯಾಗುತ್ತದೆ.
18. ಮೋಕ್ಷಸನ್ಯಾಸಯೋಗ : ಇದರಿಂದ ಸಮಸ್ತಯಜ್ಞಾಚರಣೆಯ ಫಲವು ಪ್ರಾಪ್ತವಾಗುತ್ತದೆ. ಉದ್ಯೋಗವು ಲಭಿಸುತ್ತದೆ.

ಹೀಗೆ ಮೇಲಿನ ರೀತಿಯಲ್ಲಿ ಆಯಾ ಪ್ರಯೋಜನಗಳಿಗಾಗಿ ಪಾರಾಯಣ ಮಾಡುವ ಸಂಪ್ರದಾಯ ಈಗ ನಶಿಸಿಹೋಗಿದೆ. ಹೀಗೆ ಮಾಡಿರೆಂದರೂ ನಗುತ್ತಾರೆ. ಹಾಗಾದರೆ ಯಾಕಾಗಿ ಭಗವದ್ಗೀತೆ ಇದೆ ? ಯಾರಿಗಾಗಿ ಭಗವದ್ಗೀತೆ ?

4. **ಭಗವದ್ಗೀತೆ ಯಾರಿಗೆ ?** – ಬಹಳ ವರುಷಗಳು ಕಳೆದಿವೆ. ನಮ್ಮ ಸಮಾಜಕ್ಕೆ ಹೆಚ್ಚು ದೊಡ್ಡ ದೊಡ್ಡ ಬಿಡಿಸಲಾರದ ಪ್ರಶ್ನೆಗಳು ಈಗ ಎದುರಾಗಿವೆ. ಪಾರಾಯಣವನ್ನು ನಿಯಮ ನಿಷ್ಠೆಯಿಂದ ಮಾಡುವ ರೀತಿ, ಸಹನೆ ಕಡಿಮೆಯಾಗಿದೆ. ನಂಬಿಕೆಗಳು ಕೂಡ ತಗ್ಗಿಹೋಗಿವೆ. ಭಗವದ್ಗೀತೆಯ ಪ್ರಯೋಜನವೂ ಬಹುಮಟ್ಟಿಗೆ, ಈ ಸಮಾಜಕ್ಕೆ ಶೂನ್ಯವಾಗಿ ಹೋಗಿದೆ. ಆಧುನಿಕ ನಾಗರಿಕತೆ ಸಂಸ್ಕಾರಗಳು ಮನಸ್ಸಿನಲ್ಲಿ ಗೊಂದಲ ಮಾಡುತ್ತಿರುವ ಕೆಲ ಮಂದಿ ಹೀಗೆ ಎನ್ನುವರು. "ಎಲ್ಲ ರೋಗಗಳಿಗೂ ಒಂದೇ ಔಷಧಿಯೇ ? ಲೋಕದಲ್ಲಿರುವ ಎಲ್ಲರಿಗೂ ಹಾಗೆ ಭಗವದ್ಗೀತೆಯೊಂದೇ ಶರಣೇ ? ಅದು ಜೀವನದಲ್ಲಿ ಪೆಟ್ಟು ತಿಂದವರಿಗೆ, ವ್ಯಾಪಾರದಲ್ಲಿ ನಷ್ಟ ಹೊಂದಿದವರಿಗೆ, ಸಂಸಾರದಿಂದ ಓಡಿಹೋದವರಿಗಾಗಿಯೂ ಅಂತಹ ಇತರರಿಗೂ ಬೇಕೆನ್ನುತ್ತಾರೆಯೇ ಹೊರತು ಎಲ್ಲರಿಗೂ ಭಗವದ್ಗೀತೆ ಈಗಲೇ ಏಕೆ ಬೇಕು ? ನಮಗೆ ಉಪ್ಪು, ಕಾರ ಜೀರ್ಣವಾಗುತ್ತದೆ. ಕಣ್ಣುಗಳು ಚೆನ್ನಾಗಿಯೇ ಕಾಣಿಸುತ್ತದೆ. ಕಾಲುಗಳು ಇನ್ನೂ ಹಿಡಿದುಕೊಂಡಿಲ್ಲ. ಬುದ್ಧಿಯೂ ಸ್ಥಿಮಿತದಲ್ಲಿದೆ. ವಯಸ್ಸು ಬಂದಿದೆಯೇ ಹೊರತು ಈ ಲೋಕದಲ್ಲಿ ಹುಟ್ಟಿ ನಾವೇನು ಸುಖ ಅನುಭವಿಸಿದ್ದೇವೆ ? ಅದನ್ನು ನಮ್ಮ ಅಜ್ಜಿಯಂತಹವರಿಗೆ ತಾತಂದಿರಾದಂತಹವರಿಗೆ ಹೇಳಿರಿ" ಎಂದು. ಭಗವದ್ಗೀತೆಯು ಮೇಲೆ ಹೇಳಿದವರಿಗೇ ಹೊರತು ವಾಸ್ತವವಾಗಿ ಎಲ್ಲರಿಗೂ ಪ್ರಯೋಜನವಿಲ್ಲವೇ ? ಪ್ರಯೋಜನವಾಗುವಂತಿದ್ದರೆ ಏನಿದು ಕರ್ಮ ?

4.1. ಭಗವದ್ಗೀತೆಯು ಸನ್ಯಾಸಿಗಳಿಗೇನು ? – ಕೆಲವರ ವಾದದ ಪ್ರಕಾರ. ಜೀವನದಲ್ಲಿ ಭೀತಿ ಹೊಂದಿಯೋ, ಹೆಂಡತಿ ಗಯ್ಯಾಳಿಯಾಗಿಯೋ, ಅಥವಾ ಮಠಕ್ಕೆ ಸಂಬಂಧಿಸಿದ ಆಸ್ತಿಗೆ ವಾರಸುದಾರರಿಲ್ಲದೆ ಪ್ರಭುತ್ವದ ವಶವಾಗುತ್ತದೆ ಎಂದೋ, ಸಂಸಾರದಲ್ಲಿದ್ದರೆ ಧನಸಂಪಾದನೆಗೆ ಸ್ವೇಚ್ಛಾವಿಹಾರಗಳಿಗೆ ಅವಕಾಶವಾಗದೆಂದೋ, ಕಾಷಾಯ ವಸ್ತ್ರಗಳನ್ನುಟ್ಟು ತಲೆಯನ್ನು ಬೋಳಿಸಿ ಕೊಂಡು ಸನ್ಯಾಸಿಗಳಾಗಿ ಹೋಗೋಣವೆಂದುಕೊಂಡ ತ್ಯಾಗಪುರುಷರಿಗೇ

ಹೊರತು, ಗೃಹಸ್ಥರಾಗಿ ಹೆಚ್ಚು ಸುಖ ಅನುಭವಿಸುತ್ತಿದ್ದೇವೆ ಎಂದುಕೊಳ್ಳುವವರಿಗಾಗಿ ಭಗವದ್ಗೀತೆಯು ಅಗತ್ಯವಿಲ್ಲ. ಈ ಮಾತು ಹೇಗೆ ಸತ್ಯ ? ಭಗವದ್ಗೀತೆಯು ಸನ್ಯಾಸಿಗಳ ಧರ್ಮವನ್ನು ಹೇಳುವುದಿಲ್ಲವಲ್ಲ.

4.2. ಭಗವದ್ಗೀತೆಯು ವೃದ್ಧರಿಗಾಗಿಯೇ ? – ಹಲವು ಯುವಕರು ಹೇಳುತ್ತಾರೆ. ''ಆತ್ಮ, ಮನಸ್ಸು, ಇಂದ್ರಿಯ, ಇವುಗಳ ನಿಗ್ರಹ – ಇವೆಲ್ಲವೂ ಶರೀರದಲ್ಲಿ ರಕ್ತದ ಬಿಸಿ ತಗ್ಗಿ, ನರನಾಡಿಗಳೂ ಕುಗ್ಗಿ, ಕಣ್ಣು ಸರಿಯಾಗಿ ಕಾಣಿಸದೆ, ಕಿವಿ ಕೇಳದೆ, ಕೋಲಿನ ನೆರವು ಪಡೆದು, ಕೆಲಸದಿಂದ ನಿವೃತ್ತಿ ಹೊಂದಿ, ಉದ್ಯೋಗಾನಂತರದವೇತನ ಜೀವನಪರ್ಯಂತ ಬರುವುದೆಂಬ ಆಸೆಯಿಲ್ಲದೆ ಜೀವಚ್ಛವದಂತೆ ಇರುವ ಮುದುಕರಿಗೆ ಅಗತ್ಯ. ಆದ್ದರಿಂದ ನಿಮ್ಮ ಭಗವದ್ಗೀತೆ ಅವರಿಗೆ ಉಪಯೋಗವಾಗುತ್ತದೆ. ಏಕೆಂದರೆ ಮನೆಯಲ್ಲಿ ಹೆಂಡತಿ ಮಕ್ಕಳು ಸೊಸೆಯರು ಗೌರವಿಸದಿದ್ದಲ್ಲಿ ಒಂದು ಪಾಕೆಟ್ ಸೈಜ್ ಭಗವದ್ಗೀತೆಯನ್ನು ಕೊಂಡುಕೊಂಡು ಜೇಬಿನಲ್ಲಿಟ್ಟುಕೊಂಡು ಹಾಗೆಯೇ ನಡೆದು ಊರ ಕೊನೆಯಲ್ಲಿ ಕುಳಿತುಕೊಂಡು ಓದಬಹುದು. ಅದರಲ್ಲಿ ಏನಾದರೂ ಅರ್ಥವಾದರೆ ಮಕ್ಕಳೊಂದಿಗೆ, ಸೊಸೆಯರೊಂದಿಗೆ ಜಗಳವಾಡದೆ ಮನೋನಿಗ್ರಹದಿಂದ ಇರಬಹುದು. ಅವರು ಹಾಕಿದ ಹಿಡಿ ಕೂಳು ತಿಂದು ಸಹನೆಯಿಂದ ಪ್ರಾಣವನ್ನು ಬಿಗಿಹಿಡಿಯಬಹುದು. ಹಾಗಾಗಿ ವೃದ್ಧರಿಗೆ ಭಗವದ್ಗೀತೆ ಎಷ್ಟಾದರೂ ಅಗತ್ಯ. ನಮಗೇಕೆ'' ಎಂದು. ಹಾಗೆ ವೃದ್ಧರಿಗೇ ಭಗವದ್ಗೀತೆ ಎಂದುಕೊಳ್ಳೋಣವೆಂದರೆ ಈ ಸಮಾಜವನ್ನು ನೋಡಿದಾಗ ಇಂದ್ರಿಯ ನಿಗ್ರಹ, ಮನೋನಿಗ್ರಹ ವೃದ್ಧರಿಗಿಂತಲೂ ಯುವಕರಿಗೆ ಹೆಚ್ಚಿನ ಅಗತ್ಯ ಎನಿಸುತ್ತದೆ. ಎಂದ ಮೇಲೆ ವೃದ್ಧರಿಗಾಗಿಯೇ ಭಗವದ್ಗೀತೆ - ಎನ್ನುವುದು ನ್ಯಾಯವೇ ?

4.3. ಭಗವದ್ಗೀತೆಯು ರೋಗಗ್ರಸ್ತರಿಗಾಗಿಯೇ ?– ಹಲವು ಬುದ್ಧಿವಂತರೆನ್ನುತ್ತಾರೆ. ''ದೇವರ ದಯೆಯಿಂದ, ನಮ್ಮ ವೈದ್ಯರ ಕರುಣೆಯಿಂದ ನಾವು ಆರೋಗ್ಯವಾಗಿಯೇ ಇದ್ದೇವೆ. ನಮಗೆ ಕಾಲು ಕಣ್ಣು ಚೆನ್ನಾಗಿ ಕೆಲಸ ಮಾಡುತ್ತಿವೆ. ಹಾಸಿಗೆ ಹಿಡಿದಿಲ್ಲ ಆದ್ದರಿಂದ ನಮಗಿಂತಲೂ ಬೇರೆ ಯಾರಿಗಾದರೂ ಎಂದರೆ ಹಾಸಿಗೆ ಹಿಡಿದು ಏಳಲಾಗದೆ ಇನ್ನು ತಿಂಗಳೋ ದಿನಗಳೋ ಎನ್ನುವಂತಹವರಿಗೆ ಹೇಳಿದರೆ ಮೋಕ್ಷವಾದರೂ ಹೊಂದುತ್ತಾರೆ. ಅದು ಬಿಟ್ಟು ನಮಗೇನು ಅವಸರ'' ಎಂದು. ಪ್ರತಿಯೊಬ್ಬನೂ ಹಾಸಿಗೆ ಹಿಡಿದೇ ಸಾಯುತ್ತಾನೆ ಎಂಬ ನಿಶ್ಚಯವಾದರೂ ಏನು ? ಮೇಲಾಗಿ ಅನಾರೋಗ್ಯದಿಂದ ಶರೀರ ಶಿಥಿಲವಾದ ದಿನಗಳಲ್ಲಿ ಮನುಷ್ಯ ಭಗವದ್ಗೀತೆಯನ್ನು ಕೇಳಿ ಮಾಡುವುದಾದರೂ ಏನು ? ನೀವು ಕೇಳಿಲ್ಲವೇ–

ಯುವೈವ ಧರ್ಮಶೀಲಃ ಸ್ಯಾತ್ ಅನಿತ್ಯಂ ಖಲು ಜೀವಿತಮ್ ।
ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯುಕಾಲೋ ಭವೇದಿತಿ ।।

ಎಂದು. ಈ ಅನಿತ್ಯವಾದ ಜೀವನದಲ್ಲಿ ಯಾರು ಎಷ್ಟು ಕಾಲ ಇರಬಲ್ಲರೋ ಯಾರಿಗೂ ತಿಳಿಯದು. ಆದ್ದರಿಂದ ಯೌವ್ವನದಲ್ಲೇ ಧರ್ಮಮಾರ್ಗದಲ್ಲಿ ನಡೆಯಬೇಕು. ಹಾಗಾಗಿ ರೋಗಗ್ರಸ್ತರಿಗೆ ಮಾತ್ರವೇ ಭಗವದ್ಗೀತೆ ಎನ್ನುವುದು ಹಾಸ್ಯಾಸ್ಪದ.

4.4. ಭಗವದ್ಗೀತೆಯು ಅಸಮರ್ಥರಿಗಾಗಿಯೇ ? – ಈ ಸಮಾಜದಲ್ಲಿರುವ ಕೆಲವು ಅಹಂಕಾರಿಗಳು ಹೇಳುತ್ತಾರೆ. "ಅಯ್ಯೋ ! ನನಗೆ ತಿಳುವಳಿಕೆ ಇರುವವರೆಗೂ ದೇವರೂ ಬೇಕಾಗಿಲ್ಲ, ದೈವವೂ ಬೇಡ. ನಾನು ಯಾರ ಮೇಲೂ ಆಧಾರಿತನಾಗಿಲ್ಲ. ನನ್ನ ಕಾಲ ಮೇಲೆ ನಾನು ನಿಲ್ಲ ಬಯಸುವೆನು. ನಾನು ಎಂದಿಗೂ ಯಾವ ಕೆಲಸವನ್ನೂ ಸಾಮರ್ಥ್ಯ ರಹಿತನಾಗಿ ಮಾಡುವುದಿಲ್ಲ. ಹೇಗೆ ಇತರರನ್ನು ಬೀಳಿಸಬೇಕೊ, ಹೇಗೆ ಅವರಿಂದ ದುಡ್ಡು ಸಂಪಾದಿಸಬೇಕೋ ನನಗೆ ಚೆನ್ನಾಗಿ ತಿಳಿದಿದೆ. ನನ್ನ ಮೇಲೆ ನನಗೆ ವಿಶ್ವಾಸವಿದೆ. ನಿಮ್ಮ ಭಗವದ್ಗೀತೆಗಳು, ಬ್ರಹ್ಮಪುರಾಣಗಳು ಬುದ್ಧಿ ತಿಳುವಳಿಕೆಯಿಲ್ಲದವರಿಗೆ ಬೇಕೇ ಹೊರತು ನನಗೇಕೆ ?" ಎಂದು. ತಿಳುವಳಿಕೆ ಹೊಂದಿದವನು ಆಡುವ ಮಾತೇ ಇದು ? ಅಸಮರ್ಥರಿಗಿಂತ ಹೆಚ್ಚಾಗಿ ಸಮರ್ಥರಿಗೆ ಭಗವದ್ಗೀತೆಯು ಬೇಕು. ಏಕೆಂದರೆ ಒಳ್ಳೆಯ ಕೆಲಸಗಳನ್ನು ಇನ್ನೂ ಒಳ್ಳೆಯ ಸಾಮರ್ಥ್ಯದಿಂದ ಮಾಡುವುದಕ್ಕಾಗಿ. ಅಸಮರ್ಥರು ಭಗವದ್ಗೀತೆಯನ್ನು ಹಿಡಿದು ಏನು ಮಾಡುತ್ತಾರೆ ?

4.5. ಭಗವದ್ಗೀತೆಯನ್ನು ಎಲ್ಲರೂ ಓದಬಹುದೇ ? – ಅತಿವಿನಯ ಸಂಪನ್ನರಾದ ವ್ಯಕ್ತಿಗಳು ಕೆಲವರೆನ್ನುವರು. "ಭಗವದ್ಗೀತೆಯನ್ನು ನನ್ನಂತಹವರೂ ಓದಬಹುದೇ ? ಎಲ್ಲರೂ ಓದಬಾರದಂತೆ ಹೌದೇ ? ಆ ಪುಸ್ತಕ ಮನೆಯಲ್ಲಿದ್ದರೂ ಒಳ್ಳೆಯದಲ್ಲಾ ಎನ್ನುವರು ! ಅದನ್ನು ಯಾರೋ ಕೆಲವರು ಮಾತ್ರ ಮುಟ್ಟಬಹುದಂತೆ. ಅಂತಹುದು ನಮಗೇಕೆ ಬೇಕು. 'ಬಾವಿ ತೋಡಿದರೆ ದೆವ್ವ ಹೊರಬಂದಂತೆ' ಇಲ್ಲಿಯವರೆವಿಗೂ ಓದದೆ ಈಗ ಓದಿದರೆ ನಮಗೆ ಏನು ಅನರ್ಥವಾಗುವುದೋ" ಎಂದು. ಇದು ಒಂದು ಮೂರ್ಖವಾದ ಅಥವಾ ಸ್ಪಷ್ಟವಾಗಿ ಹೇಳಬೇಕೆಂದರೆ ಗಡುಸುತನದ ಮಾತು, ವ್ಯಾಧಿ ನಿಮ್ಮಲ್ಲಿ ಇವೆ. ಪೇಟೆಯಲ್ಲಿ ಔಷಧಿಗಳು ದೊರೆಯುತ್ತವೆ. ಆಲಸ್ಯ ಮಾಡಿದರೆ ನಷ್ಟ ಔಷಧಿಗೋ ? ನಿಮಗೋ ?

4.6. ಭಗವದ್ಗೀತೆಯನ್ನು ಓದುವುದರಿಂದ ಏನು ಲಾಭ ? – ಲಾಭನಷ್ಟಗಳ ಲೆಕ್ಕ ಹಾಕಿ ಬದುಕುವ ಜನ ಎನ್ನುತ್ತಾರೆ– "ಭಗವದ್ಗೀತೆಯನ್ನು ತಪ್ಪದೆ ಓದುತ್ತೇವೆಂದುಕೊಳ್ಳೋಣ ಅದರಿಂದೇನು ಲಾಭ– ಅದು ಯಾವ ರೂಪ ದಿಂದ ದೊರೆಯುವುದು ? ಮತ್ತೆ ಹಾಗಲ್ಲದಿದ್ದರೆ ನಾವು ಎಷ್ಟು ಸಮಯವನ್ನು ಅದಕ್ಕಾಗಿ ವೆಚ್ಚಮಾಡುತ್ತೇವೆ ! ತಕ್ಕಷ್ಟು ಲಾಭವಿಲ್ಲದೆ ಯಾವ ಕೆಲಸವನ್ನು ಮಾಡುವುದೂ ನಮಗೆ ಅಭ್ಯಾಸವಿಲ್ಲ" ಎಂದು. ನಿಮಗೆ ಇಂತಹ ದುರಾಲೋಚನೆಗಳು ದೂರವಾಗುವುದೇ ಮೊದಲನೆಯ ಲಾಭ.

ಆಮೇಲೆ ನೀವು ಇಲ್ಲಿಯವರೆವಿಗೂ ಎಷ್ಟು ಕಾಲ ವ್ಯಥಾ ಕಳೆದಿರೋ, ಅಜ್ಞಾನದಿಂದ ನಿಜವಾಗಿಯೂ ಎಷ್ಟು ನಷ್ಟಪಟ್ಟಿರೋ ಎಂದು ತಿಳಿಯುವುದು ಎರಡನೆಯ ಲಾಭ. ಲಾಭ ಪಡೆಯಬೇಕೆಂಬ ಹಂಬಲ ಖಂಡಿತವಾಗಿ ನಿಮಗಿದ್ದರೆ ನೀವೇ ಭಗವದ್ಗೀತೆಯನ್ನು ಓದಲು ಅರ್ಹರು.

5. **ವೇದಾಂತಸಾರವೇ ಭಗವದ್ಗೀತೆ :—** ನಾವು ಸಮಾಜದಲ್ಲಿ ಇಂತಹ ಕೆಲಸಕ್ಕೆ ಬಾರದ ಪ್ರಶ್ನೆಗಳು, ಇದಕ್ಕಿಂತಲೂ ಹಾಸ್ಯಾಸ್ಪದವಾದಂತಹುದನ್ನು ಎಷ್ಟೋ ಬಾರಿ ಕೇಳುತ್ತಿದ್ದೇವೆ. ಇಂತಹ ಪ್ರವೃತ್ತಿಗಳಲ್ಲಿ ಹೆಚ್ಚು ದಯೆ ತೋರಬೇಕು. ಏಕೆಂದರೆ ಪ್ರಪಂಚದಲ್ಲಿರುವ ಜೀವಿಗಳೆಲ್ಲರಿಗೂ ಭಗವದ್ಗೀತೆಯಿಂದ ಪ್ರಯೋಜನವಿದೆ. ಸೂರ್ಯನು ನನಗೇಕೆ ಬೇಕು ಎನ್ನುವ ಮೂರ್ಖನು ಪ್ರಪಂಚದಲ್ಲಿನ ಯಾವ ದೇಶದಲ್ಲಿಯಾದರೂ ಇರುವನೇ ? ಪ್ರಾಣವಾಯುವನ್ನು ತಿರಸ್ಕರಿಸುವ ಜಡನು ಎಲ್ಲಿಯಾದರೂ ಇರುವನೇ ? ಪ್ರಪಂಚದಲ್ಲಿರುವ ಸಕಲ ವೇದಾಂತಗಳಿಗೂ ಮೂಲಸೂತ್ರಗಳನ್ನು ಭಗವದ್ಗೀತೆಯಲ್ಲಿ ಹೊಂದಿಸಿರಲು, ಭಾರತೀಯ ವೇದಾಂತದರ್ಶನ ಸರ್ವಸ್ವವೂ ಭಗವದ್ಗೀತೆಯಲ್ಲಿ ಸಾಕ್ಷಾತ್ಕಾರವಾಗುತ್ತಿರಲು, ಹುಟ್ಟಿದ ಪ್ರತಿಯೊಬ್ಬನಿಗೂ ಸಂಬಂಧಿಸಿದ ಸಮಸ್ಯೆಗಳೇ ಭಗವದ್ಗೀತೆಯಲ್ಲಿ ಚರ್ಚಿಸಿರಲು ಭಗವದ್ಗೀತೆಯು ಎಲ್ಲರಿಗೂ ಬೇಕೇ, ಬೇಡವೇ ಎನ್ನುವ ಮೀಮಾಂಸೆ ಏಕೆ ?

6. **ಭಗವದ್ಗೀತೆ ಪ್ರತಿ ಜೀವಿಗೂ ಬೇಕು :—** ಭೂಮಿಯ ಮೇಲೆ ಜನಿಸಿದ ಪ್ರತಿ ಜೀವಿಗೂ ಭಗವದ್ಗೀತೆ ಬೇಕಾಗಿದೆ. ಮನುಷ್ಯರು ಜ್ಞಾನಪಡೆಯಲು ಅದು ಉಪಯೋಗವಾಗುತ್ತದೆ. ಮಾನವೇತರರಿಗೆ ಅದರಲ್ಲಿನ ಶಬ್ದಗಳು ಕಿವಿಗೆ ಬಿದ್ದ ಮಾತ್ರಕ್ಕೆ ಪಾಪಗಳು ನಶಿಸಿ ಉತ್ತಮ ಜನ್ಮ ಪ್ರಾಪ್ತವಾಗುತ್ತವೆ. ಹಾಗಾಗಿ ಅವನು ಸನ್ಯಾಸಿಯಲ್ಲವೆ, ವೃದ್ಧನಲ್ಲವೆ, ರೋಗಿಯಲ್ಲವೆ ಮಿಗಿಲಾಗಿ ಅಸಮರ್ಥನಲ್ಲವೇ ಎಂದು ಸಂಶಯ ಪಡುವುದು ಬುದ್ಧಿಲೋಪದಿಂದಲೋ ಅಥವಾ ತಿಳಿಯ ಹೇಳುವವರು ಇಲ್ಲವೆಂತಲೋ ಆಗಿರಬಹುದು. ಕಣ್ಣಿರುವ ಪ್ರತಿಯೊಬ್ಬನಿಗೂ ಬೆಳಕಿನ ಅಗತ್ಯವಿರುವಂತೆ, ಹುಟ್ಟಿದ ಪ್ರತಿಯೊಬ್ಬನಿಗೂ ಸಮಸ್ಯೆಗಳು ಇರುತ್ತವೆಯಾಗಿ ಅವುಗಳನ್ನು ಮೀರಿ ಮೇಲೇರಬೇಕಾದರೆ ತನ್ನಲ್ಲಿರುವ ಲೋಪಗಳನ್ನು ತಿಳಿದುಕೊಳ್ಳಬೇಕಾದ ಅಗತ್ಯವಿರುತ್ತದೆ. ಮೊದಲು ತನ್ನ ಸ್ವರೂಪವನ್ನು ಅರ್ಥಮಾಡಿಕೊಂಡು ತಾನು ಯಾವ ತಪ್ಪು ಮಾಡಿದ್ದರಿಂದ ಸಮಸ್ಯೆಗಳು ಉಂಟಾಗುತ್ತಿವೆ ಎಂಬುದನ್ನು ತಿಳಿದುಕೊಂಡಾಗ ಆ ಸಮಸ್ಯೆಗಳನ್ನು ಸುಲಭವಾಗಿ ಪರಿಷ್ಕರಿಸಿಕೊಳ್ಳಬಹುದು. ಸಮಸ್ಯೆ ತಿಳಿಯದೆ ಹೋದಾಗ ಅದರ ಪರಿಷ್ಕಾರವೂ ಅಸಾಧ್ಯವಾಗುತ್ತದೆ. ಸಮಾಜದಲ್ಲಿ ಜೀವಿಸುವ ಪ್ರತಿಯೊಬ್ಬನಿಗೂ ಪ್ರಾಪ್ತವಾಗುವ ಸಮಸ್ಯೆಗಳಿಗೆ ಭಗವದ್ಗೀತೆ ಯಾವ ಪರಿಷ್ಕಾರವನ್ನು ತಿಳಿಯಹೇಳುವುದೆಂಬ ದೃಷ್ಟಿಯಿಂದ ಭಗವದ್ಗೀತೆಯನ್ನು ಓದಲು ಮೊದಲು ಮಾಡಿದೆ. ನನಗೆ ತೋಚಿದ ಭಾವನೆಗಳನ್ನು ಅಲ್ಲಲ್ಲಿ ಉಪನ್ಯಾಸಗಳಲ್ಲಿ ತಿಳಿಸಿದೆ. ಬಹುಮಂದಿಗೆ ಈ ದೃಷ್ಟಿಯಿಂದ ಹೀಗೆ ಭಗವದ್ಗೀತೆಯನ್ನು ಅನ್ವಯಿಸುವುದು ಮೆಚ್ಚುಗೆಯಾಯಿತು. ಸ್ನೇಹಿತರು ಬಹುಮಂದಿ ಅನೇಕ ವಿಧಗಳಲ್ಲಿ ಅನೇಕ ಸಂದರ್ಭಗಳಲ್ಲಿ ಪ್ರೋತ್ಸಾಹವನ್ನು

ಕೊಟ್ಟಿರುವರು. ನಂತರ ಚೆನ್ನಾದ ಒಂದು ಪ್ರಣಾಳಿಕೆಯನ್ನು ಸಿದ್ಧಪಡಿಸಿದೆ. ಅದರ ಪ್ರಕಾರವೇ ಈ ರಚನೆ ಸಾಗಿದೆ.

6. 1. ನಮ್ಮ ಸಮಸ್ಯೆಗಳಿಗೆ ಭಗವದ್ಗೀತೆಯ ಪರಿಷ್ಕಾರ :– ಭಗವದ್ಗೀತೆಯಲ್ಲಿರುವ ಸ್ಪಷ್ಟವಾದ ಕೆಲವು ಸಿದ್ಧಾಂತಗಳು ವೇದಾಂತಿಗಳಿಗೆ ಮಾತ್ರವೇ ಅಲ್ಲದೆ ಸಾಮಾನ್ಯ ಮಾನವನು ಜೀವನದಲ್ಲಿ ಪ್ರತಿದಿನವೂ ಎದುರಿಸುವ ಸಮಸ್ಯೆಗಳಿಗೆ ಸರಿಹೊಂದುವ ಪರಿಷ್ಕಾರಗಳನ್ನು ಒದಗಿಸುತ್ತದೆ. ಮಹಾಪುರುಷರ, ಮಹಾತ್ಮರ ಜೀವನಗಳನ್ನು ಪರಿಶೀಲಿಸಿದರೆ ಕ್ಲಿಷ್ಟ ಸಮಸ್ಯೆಗಳು ಸಂಭವಿಸಿದಾಗ ಅವರು ಭಗವದ್ಗೀತೆಯನ್ನು ಪರಿಹಾರ, ಸಮಾಧಾನಕ್ಕಾಗಿ ತೆಗೆದು ನೋಡಿದಂತೆ ಕಂಡುಬರುತ್ತದೆ. ಮೌಲಿಕವಾಗಿ ಸಮಸ್ಯೆಗಳು ಮನುಷ್ಯರಿಗೆ ಸಮಾನವಾಗಿಯೇ ಇದ್ದು, ಅವು ಎಲ್ಲರಿಗೂ ಪರಿಚಿತವಾದವುಗಳೇ ಆಗಿರುತ್ತವೆ. ಹಾಗಾಗಿ ಭಗವದ್ಗೀತೆಯ ಅಧ್ಯಾಯಗಳನ್ನು ಅನುಸರಿಸಿ ಓದುವವರಿಗೆ ಮುಖ್ಯವಾಗಿ ತೋರುವ ಸಿದ್ಧಾಂತಗಳನ್ನೇ ಈ ಪುಸ್ತಕದಲ್ಲಿ ಆರಿಸಿಕೊಂಡು ಯಾವ ಸಮಸ್ಯೆಯನ್ನು ಅವು ಹೇಗೆ ಪರಿಷ್ಕರಿಸುವುವೋ, ಯಾವ ಸಂಶಯಗಳನ್ನು ಹೇಗೆ ಉತ್ತರಿಸುವುವು ಎಂಬುದನ್ನು ಊಹಿಸಿ ಕೆಲವನ್ನು ಹೀಗೆ ನಿರೂಪಿಸಿರುವೆನು. ಇಂತಹ ಇತರ ಸಮಸ್ಯೆಗಳು ಎಷ್ಟಿದ್ದರೂ ಸಹ ಭಗವದ್ಗೀತೆಯ ಮುಖಾಂತರ ನಾವು ಪರಿಷ್ಕರಿಸಿಕೊಳ್ಳಬಹುದು. ಮೊದಲಿಗೆ ಭಗವದ್ಗೀತೆಯನ್ನು ಓದದೆ ಇರುವವರೂ ಕೂಡ ಈ ರೂಪದಲ್ಲಿ ಎಲ್ಲ ಅಧ್ಯಾಯಗಳಲ್ಲೂ ಇರುವ ಮುಖ್ಯ ಶ್ಲೋಕಗಳನ್ನು ಒಂದು ಬಾರಿ ಓದಿದಂತಾಗುತ್ತದೆ. ಸಮಾಜದಲ್ಲಿ ಪ್ರತಿವೃತ್ತಿಯಲ್ಲಿರುವವರಿಗೂ ಇದು ಪ್ರಯೋಜಕವಾಗಬೇಕೆಂಬುದೇ ನನ್ನ ಗುರಿಯಾಗಿದೆ. ಬಾಹ್ಯಪ್ರಪಂಚದ ಮಾಯೆಯಲ್ಲಿ ಮುಗ್ಗುರಿಸುತ್ತಿರುವ ನಮಗೆ ನಮ್ಮ ಅಂತರಂಗ ಪ್ರಪಂಚವು ಕಂಡುಬರಬೇಕೆಂದು, ನಮ್ಮ ಲೋಪಗಳು ಅರ್ಥವಾಗಬೇಕೆಂದು, ಈ ಪದ್ಧತಿಯಲ್ಲಿ ರಚನೆ ಮಾಡಿರುವೆನು. ಎಲ್ಲರಿಗೂ ಸುಲಭವಾಗಿಯೇ ಇರಬೇಕೆಂದು ವ್ಯಾವಹಾರಿಕ ಭಾಷೆಯನ್ನೇ ಉಪಯೋಗಿಸಿರುವೆನು. ಇದರಲ್ಲಿ ಹೇಳಲಾಗಿರುವ ಸಮಸ್ಯೆಗಳು ಪರಿಷ್ಕಾರಗಳು ಯಾವ ಮತದವರಿಗಾದರೂ ಬೇಕಾಗಿರುವುದೇ. ಅಲ್ಲದೆ ಅವುಗಳನ್ನು ಅರ್ಥಮಾಡಿಕೊಂಡು ಇಂದ್ರಿಯನಿಗ್ರಹದಿಂದ, ಮನೋನಿಗ್ರಹದಿಂದ, ಆತ್ಮಗುಣಗಳಿಂದ ಕರ್ಮಯೋಗದಿಂದ ಜೀವನವನ್ನು ಸಾಗಿಸಿದರೆ ಪ್ರತಿಯೊಬ್ಬರೂ ಆದರ್ಶಪ್ರವೃತ್ತಿಗಳ ಮಾನವರಾಗಿ ರೂಪಾಂತರ ಹೊಂದುತ್ತಾರೆ. ಪರಿಪೂರ್ಣರಾಗುತ್ತಾರೆ. ಅದಕ್ಕಾಗಿ ಕೆಲಮಂದಿಗಾದರೂ ನನ್ನ ಈ ಪ್ರಯತ್ನವು ಬೆಳಕು ತೋರಿಸುವಂತಾದರೆ ನಾನು ಕೃತಾರ್ಥನಾಗುವೆನು.

**ಡಾ|| ಎಸ್. ಬಿ. ರಘುನಾಥಾಚಾರ್ಯ**

ಸಂಸ್ಕೃತ ವಿಭಾಗ

ಶ್ರೀ ವೆಂಕಟೇಶ್ವರ ವಿದ್ಯಾಲಯ.

# ಸ ಮ ಸ್ಯಾ ಸೂ ಚಿ ...